# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1787** |
| ಸದಸ್ಯರ ಹೆಸರು | : | ಶ್ರೀ ಆರ್. ಬಿ. ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 14-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಕುಪ್ಪಗಡ್ಡೆ ಗ್ರಾಮದಲ್ಲಿ ಹಿಂದಿನ ಅವಧಿಯಲ್ಲಿ 110/11 ಕೆ.ವಿ. MUSS ಸಬ್ ಸ್ಟೇಷನ್ ಮಂಜೂರು ಮಾಡಿರುವುದು ನಿಜವೇ; | ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಕುಪ್ಪಗಡ್ಡೆ ಗ್ರಾಮದಲ್ಲಿ ನೂತನವಾಗಿ 1*10ಎಂವಿಎ, 110/11 ಕೆವಿ ವಿದ್ಯುತ್ ಉಪ ಕೇಂದ್ರುವನ್ನು ನಿರ್ಮಿಸುವ ಹಾಗೂ ತೋಗರ್ಸಿ ವಿದ್ಯುತ್ ಉಪಕೇಂದ್ರುದಿಂದ ಕುಪ್ಪಗಡ್ಡೆ ವರೆಗೆ ಡಿ.ಸಿ. ಗೋಪುರಗಳ ಮೇಲೆ ಸುಮಾರು 11.648 ಕಿ.ಮೀ. ಏಕ ಪ್ರಸರಣ ಮಾರ್ಗವನ್ನು ನಿರ್ಮಿಸುವ ಪ್ರಸ್ತಾವನೆಯು ಕವಿಪ್ರನಿನಿಯ 71ನೇ ತಾಂತ್ರಿಕ ಸಮನ್ವಯ ಸಮಿತಿ ಸಭೆಯಲ್ಲಿ ಅನುಮೋದನೆಗೊಂಡಿರುತ್ತದೆ.<br><br>ಸದರಿ ವಿದ್ಯುತ್ ಉಪಕೇಂದ್ರುವನ್ನು ಸ್ಥಾಪಿಸಲು ಅಗತ್ಯವಿರುವ 2.00 ಎಕರೆ ಜಾಗವು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಹಸ್ತಾಂತರಗೊಂಡಿದ್ದು, ಪ್ರಸ್ತುತ ಸದರಿ ಜಾಗವು ಕವಿಪ್ರನಿನಿ ಸುಪರ್ದಿಯಲ್ಲಿರುತ್ತದೆ.<br><br>110/11 ಕೆವಿ ಕುಪ್ಪಗಡ್ಡೆ ವಿದ್ಯುತ್ ಉಪಕೇಂದ್ರುಕ್ಕೆ ತೊಗರ್ಸಿ ವಿದ್ಯುತ್ ಉಪಕೇಂದ್ರುದಿಂದ 110 ಕೆವಿ ವಿದ್ಯುತ್ ಪ್ರಸರಣ ಮಾರ್ಗವನ್ನು ನಿರ್ಮಿಸಲು ಉದ್ದೇಶಿಸಲಾಗಿದೆ. ಸದರಿ ವಿದ್ಯುತ್ ಪ್ರಸರಣ ಮಾರ್ಗವು 11.648 ಕಿ.ಮೀ. ಉದ್ದ ಹಾಗೂ 22 ಮೀಟರ್ ಅಗಲ ಕಾರಿಡಾರ್ ಒಳಗೊಂಡಿದ್ದು, 6.048 ಹೆಕ್ಟರ್ ಸಾಮಾಜಿಕ ಅರಣ್ಯ ಪ್ರದೇಶದಲ್ಲಿ ಹಾದುಹೋಗುವುದರಿಂದ ಅರಣ್ಯ ಇಲಾಖೆಯ ಅನುಮತಿಗಾಗಿ ಪ್ರಸ್ತಾವನೆಯನ್ನು ಈಗಾಗಲೇ ದಿನಾಂಕ: 07.02.2019ರಲ್ಲಿ ಸಲ್ಲಿಸಲಾಗಿತ್ತು. |
| ಆ) | ಹಾಗಿದ್ದಲ್ಲಿ, ಇಲ್ಲಿಯವರೆಗೆ ಸದರಿ ಗ್ರಾಮದಲ್ಲಿ 110 ಕೆ.ವಿ. ಸ್ಟೇಷನ್ ಅಳವಡಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ, ಯಾವ ಕ್ರಮ ಕೈಗೊಂಡಿದೆ; (ವಿವರ ನೀಡುವುದು) | |

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಭವನ, ಬೆಂಗಳೂರು ರವರು ಸದರಿ ಪ್ರಸ್ತಾವನೆಯನ್ನು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಪರ್ಯಾಯ ಮಾರ್ಗವನ್ನು ಸೂಚಿಸುವಂತೆ ತಿಳಿಸಿದ್ದು, ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ರವರು ವಲಯ ಅರಣ್ಯಾಧಿಕಾರಿ, ಸೊರಬ ರವರಿಗೆ ಪರ್ಯಾಯ ಜಾಗದ ಮಾಹಿತಿಯನ್ನು ಪಡೆಯುವಂತೆ ತಿಳಿಸಿರುತ್ತಾರೆ.

ಪ್ರಸ್ತುತ ಪರ್ಯಾಯ ಮಾರ್ಗವು ಲಭ್ಯವಿರುವುದಿಲ್ಲವೆಂದು ತಿಳಿದು ಬಂದಿರುತ್ತದೆ. ಉದ್ದೇಶಿತ 110 ಕೆ.ವಿ. ವಿದ್ಯುತ್ ಕಾರಿಡಾರ್ ನಲ್ಲಿ ಒಟ್ಟು 384 ಫಲಾನುಭವಿಗಳು ಅರಣ್ಯ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದು, ಅರಣ್ಯ ಹಕ್ಕು ಸಮಿತಿಗೆ ಜಾಗದ ಮಂಜೂರಾತಿಗಾಗಿ ಅರ್ಜಿ ಸಲ್ಲಿಸಿರುತ್ತಾರೆ.

ಅರಣ್ಯ ಹಕ್ಕು ಸಮಿತಿ ಸಭೆಯು ಸದರಿ ಅರ್ಜಿಗಳನ್ನು ತಿರಸ್ಕರಿಸಿದ್ದು, ಹೆಚ್ಚಿನ ದಾಖಲಾತಿಗಳಿದ್ದಲ್ಲಿ ಮೂರು ತಿಂಗಳೊಳಗೆ (ದಿನಾಂಕ 18-12-2021 ರೊಳಗೆ) ಮೇಲ್ಮನವಿ ಸಲ್ಲಿಸಲು ಅರ್ಜಿದಾರರಿಗೆ ಸೂಚಿಸಿರುತ್ತಾರೆ. ಇಲ್ಲಿಯವರೆಗೆ ಯಾವುದೇ ಮೇಲ್ಮನವಿ ಅರ್ಜಿಗಳು ಶಿವಮೊಗ್ಗ ಜಿಲ್ಲಾಧಿಕಾರಿಯವರ ಕಛೇರಿಯಲ್ಲಿ ಸಲ್ಲಿಕೆಯಾಗಿರುವುದಿಲ್ಲ. ಈ ಹಿನ್ನಲೆಯಲ್ಲಿ FRA (Forest Rights Act) ಪ್ರಮಾಣ ಪತ್ರ ನೀಡುವಂತೆ ಕವಿಪ್ರನಿನಿ ವತಿಯಿಂದ ಜಿಲ್ಲಾಧಿಕಾರಿ ಗಳಿಗೆ ಮನವಿಯನ್ನು ಮರುಸಲ್ಲಿಸಲಾಗಿದ್ದು, ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಶಿವಮೊಗ್ಗ ಜಿಲ್ಲೆ ರವರು FRA Certificate ನೀಡಬಹುದೆಂದು ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ರವರಿಗೆ ಅಭಿಪ್ರಾಯಿಸಿ ಪತ್ರ ದಿನಾಂಕ 11-1-2022 ರಲ್ಲಿ ತಿಳಿಸಿದ್ದು, ಜಿಲ್ಲಾಧಿಕಾರಿ, ಶಿವಮೊಗ್ಗ ರವರು ದಿನಾಂಕ 14-2-2022 ರಂದು ಎಫ್.ಆರ್.ಎ. ಪ್ರಮಾಣಪತ್ರವನ್ನು ನೀಡಿರುತ್ತಾರೆ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಶಿವಮೊಗ್ಗ ರವರು ಎಫ್.ಆರ್.ಎ. ಪ್ರಮಾಣಪತ್ರದೊಂದಿಗೆ ವಿವರವಾದ ವರದಿಯನ್ನು ಉಪ ಅರಣ್ಯಸಂರಕ್ಷಣಾಧಿಕಾರಿ, ಸಾಗರ ರವರಿಗೆ ಅರಣ್ಯ ಇಲಾಖೆ ವತಿಯಿಂದ ಅಗತ್ಯವಿರುವ ಅನುಮೋದನೆ ದೊರಕಿಸಿಕೊಡುವಂತೆ ದಿನಾಂಕ: 15-2-2022 ರಂದು ಪ್ರಸ್ತಾವನೆ ಸಲ್ಲಿಸಿದ್ದು,

| | | |
|---|---|---|
| | | ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ರವರು ದಿನಾಂಕ 3-3-2022 ರಂದು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ರವರಿಗೆ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.<br><br>ಅರಣ್ಯ ಇಲಾಖೆಯಿಂದ ಅನುಮೋದನೆ ದೊರೆತ ನಂತರ ಕವಿಪ್ರನಿನಿಯು ನಿಯಮಾನುಸಾರ ಮುಂದಿನ ಸೂಕ್ತ ಕ್ರಮಗಳನ್ನು ಕೈಗೊಳ್ಳಲಿದೆ. |
| ಈ) | ಸೊರಬ ತಾಲ್ಲೂಕಿನಾದ್ಯಂತ ಯಾವ ಯಾವ ಸ್ಥಳದಲ್ಲಿ ಹೈಸ್ಪೀಡ್ ಕರೆಂಟ್ ನಿರಂತರ ಜ್ಯೋತಿ ಯೋಜನೆ ಹಾಗೂ ಭಾಗ್ಯಜ್ಯೋತಿ ಯೋಜನೆ ಅಳವಡಿಸಲಾಗಿದೆ? (ವಿವರ ನೀಡುವುದು) | • ಸೊರಬ ತಾಲ್ಲೂಕು ಸೇರಿದಂತೆ ಮೆಸ್ಕಾಂ ವ್ಯಾಪ್ತಿಯಲ್ಲಿ 'ನಿರಂತರ ಜ್ಯೋತಿ' ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ.<br>• ಆದಾಗ್ಯೂ, ಕೇಂದ್ರ ಸರ್ಕಾರದ ದೀನ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆಯಡಿ ಶಿವಮೊಗ್ಗ ಜಿಲ್ಲೆಯಲ್ಲಿ ಗ್ರಾಮೀಣ ಫೀಡರ್ ಗಳಲ್ಲಿ ಕೃಷಿ ಹಾಗೂ ಕೃಷಿಯೇತರ ಸ್ಥಾವರಗಳನ್ನು ಬೇರ್ಪಡಿಸಲು 'ಫೀಡರ್ ಬೇರ್ಪಡಿಸುವಿಕೆ' ಕಾಮಗಾರಿಯನ್ನು ಅನುಷ್ಠಾನಗೊಳಿಸಲಾಗಿರುತ್ತದೆ.<br>• ಸಾಗರ ವಿಭಾಗದ, ಸೊರಬ ಉಪವಿಭಾಗದಲ್ಲಿ ದೀನ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿಯಡಿ 9 ಸಂಖ್ಯೆಯ ಹಾಗೂ ಶಿಕಾರಿಪುರ ವಿಭಾಗ, ಆನವಟ್ಟಿ ಉಪವಿಭಾಗದಲ್ಲಿ 4 ಸಂಖ್ಯೆಯ ಹೀಗೆ ಸೊರಬ ತಾಲೂಕಿನಲ್ಲಿ ಒಟ್ಟು 13 ಸಂಖ್ಯೆಯ 11 ಕೆ.ವಿ ನಿರಂತರ ಜ್ಯೋತಿ (ಕೃಷಿಯೇತರ) ಮಾರ್ಗಗಳನ್ನು ರಚನೆ ಮಾಡಲಾಗಿರುತ್ತದೆ. ಗ್ರಾಮವಾರು ವಿವರಗಳನ್ನು **ಅನುಬಂಧ**ದಲ್ಲಿ ಒದಗಿಸಲಾಗಿದೆ.<br>• ಮುಂದುವರಿದು, ಸೊರಬ ತಾಲೂಕಿನಲ್ಲಿ ಕೇಂದ್ರ ಸರ್ಕಾರದ ದೀನ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆಯ ಗ್ರಾಮೀಣ ವಿದ್ಯುದ್ದೀಕರಣ ಘಟಕದಡಿ 1457 ಸಂಖ್ಯೆಯ ಬಿ.ಪಿ.ಎಲ್ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ. |

*ಸಂಖ್ಯೆ: ಎನರ್ಜಿ 59 ಇಬಿಎಸ್ 2022*

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಆರ್.ಬಿ.ತಿಮ್ಮಾಪೂರ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1787ಕ್ಕೆ ಅನುಬಂಧ**

ದೀನ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆಯಡಿ ಸೊರಬ ತಾಲ್ಲೂಕು, ಸೊರಬ ಮತ್ತು ಆನವಟ್ಟಿ ಉಪವಿಭಾಗಗಳ ವ್ಯಾಪ್ತಿಯಲ್ಲಿ ಚಾಲನೆಗೊಂಡಿರುವ 11 ಕೆ.ವಿ ಮಾರ್ಗಗಳ ವಿವರ

| ಕ್ರ.ಸಂ | ವಿದ್ಯುತ್ ವಿತರಣಾ ಉಪಕೇಂದ್ರ | 11 ಕೆ.ವಿ ಮಾರ್ಗದ ಹೆಸರು | ಗ್ರಾಮಗಳ ಸಂಖ್ಯೆ | ಗ್ರಾಮಗಳ ಹೆಸರು |
|---|---|---|---|---|
| **ಸೊರಬ ಉಪವಿಭಾಗ** | | | | |
| 1 | 110/11 ಕೆವಿ ಸೊರಬ | ಕಡಸೂರು | 19 | ಮರೂರು, ನಡಹಳ್ಳಿ, ಚೀಲನೂರು, ಜೇಡಗೆರೆ, ಹಾಲಘಟ್ಟ, ಕರಡಿಗೆರೆ, ತಾವರೆಹಳ್ಳಿ, ಯಲಸಿ, ತಂಡಿಗೆ, ಕಡಸೂರು, ಕೋಣನಮನೆ, ಜಂಬೆಹಳ್ಳಿ, ಚೌಡಿಕೊಪ್ಪ, ಕಡೇಗದ್ದೆ, ಅಬಸಿ, ಕಾಸರಗುಪ್ಪೆ, ಗೊಗ್ಗೆಹಳ್ಳಿ, ಗುಂಡಶೆಟ್ಟಿಕೊಪ್ಪ, ಕಕ್ಕರಸಿ |
| 2 | | ಗುಡುವಿ | 17 | ಹಳೇಸೊರಬ, ಜಂಗಿನಕೊಪ್ಪ, ಗೌರಿಕೆರೆಮಠ, ಚಿತ್ರಟ್ಟೆಹಳ್ಳಿ, ಬಿಳವಗೋಡು, ಕುದುರೆಗಣಿ, ಕಂತನಹಳ್ಳಿ, ಬಳ್ಳಿಬೈಲು, ಸಾರೆಮರೂರು, ತ್ಯಾವಗೋಡು, ಸಾರೆಕೊಪ್ಪ, ದುಗ್ಲಿ, ಹೊಸೂರು, ಸಂಪಿಗೆಹಳ್ಳಿ, ಗುಡವಿ, ಗುಡವಿ ಪಕ್ಷಿಧಾಮ, ಹುಲೆಮರಡಿ, ಓಟೂರು |
| 3 | | ಶಿಗ್ಗಾ | 14 | ಕಪ್ಪಗಳಲೆ, ಹಾಲಗಳಲೆ, ಹೆಗ್ಗೋಡು, ಚಿಮನೂರು, ಕುಳವಳ್ಳಿ, ಕುಂಬತ್ತಿ, ಕಾನುಗೋಡು, ಮಳಲಗದ್ದೆ, ಕೊಂಡಗಳಲೆ, ಕೋಳಿಸಾಲು, ಪುರ, ಸಾಗದ್ದೆ, ಕಟ್ಟಿನಕೆರೆ, ಬೈರೇಕೊಪ್ಪ |
| 4 | 110/11 ಕೆವಿ ಸಂಡ | ಚಿಟ್ಟೂರು | 7 | ಹೆಸರಿಕೊಪ್ಪ, ಕೆರೆಕೊಪ್ಪ, ಇಂಡಿಹಳ್ಳಿ, ಮಳಲಿಕೊಪ್ಪ, ಚಿಟ್ಟೂರು, ಶ್ಯಾಡಲಕೊಪ್ಪ, ಹೆಸರಿ |
| 5 | 110/11 ಕೆವಿ ಸೊರಬ | ಕುಮ್ಮೂರು | 16 | ಕೊಡಕಣಿ, ರೊಟ್ಟಿಗೆರೆ, ಅಂಡಿಗೆ, ಚನ್ನಾಪುರ, ಶಿವಪುರ, ಬೆದವಟ್ಟಿ, ಮಾವಲಿ, ಶಾಂತಗೇರೆ, ಉರಗನಹಳ್ಳಿ, ದೇವತಿಕೊಪ್ಪ, ಹರೂರು, ತಾವರೆಕೊಪ್ಪ, ಯಲವಳ್ಳಿ, ಕಾಸ್ಪಾಡಿಕೊಪ್ಪ, ಮನ್ನನೆ, ಜಿರಲೆಕೊಪ್ಪ, |
| 6 | | ಮನ್ಮನೆ | | |
| 7 | 110/11ಕೆವಿ ಶಿರಾಳಕೊಪ್ಪ | ಕವಡಿ ಚಿಕ್ಕಸವಿ | 9 | ಹಿರೇಕಸವಿ, ಚಿಕ್ಕಸವಿ, ಕವಡಿ, ಕುಂದಗಸವಿ, ಶಿಗ್ಗಾ, ಛತ್ರದಳ್ಳಿ, ಕೋಲ್ಲುಣಿಸಿ, ಬಿಳವಾಣಿ, ಸುತ್ತುಕೋಟೆ |
| 8 | 110/11 ಕೆವಿ ಸೊರಬ | ಉಳವಿ | 24 | ನಿಸರಾಣಿ, ತಲ್ಯಾಲ್‌ಕೊಪ್ಪ, ಬಿ.ದೊಡ್ಡೇರಿ, ಅಮಚಿ, ಹೊಳೆಕೊಪ್ಪ, ಬರಗಿ, ಕೈಸೋಡಿ, ಮೈಸಾವಿ, ಕಾನಳ್ಳಿ, ಬಿ.ಸಾಗದ್ದೆ, ಖರ್ಜಿಕೊಪ್ಪ, ಉಳವಿ, ಹೊಡಬಟ್ಟೆ, ಹೊರಬೈಲು, ದಳವಾಯಿ ಹೊಸಕೊಪ್ಪ, ಚರಂತಿ ಹೊಸಕೊಪ್ಪ, ಕೆರೆಕೊಪ್ಪ, ಬನದಕೊಪ್ಪ, ಕ್ಯಾಸನೂರು, ಉಮಟೆಗದ್ದೆ, ಭದ್ರಾಪುರ, ದೂಗೂರು, ಹಲಸಿನಕೊಪ್ಪ, ಹೊರಬೈಲುಕೊಪ್ಪ, |

…2

| ಕ್ರ.ಸಂ | ವಿದ್ಯುತ್ ವಿತರಣಾ ಉಪಕೇಂದ್ರ | 11 ಕೆ.ವಿ ಮಾರ್ಗದ ಹೆಸರು | ಗ್ರಾಮಗಳ ಸಂಖ್ಯೆ | ಗ್ರಾಮಗಳ ಹೆಸರು |
|---|---|---|---|---|
| 9 | 110/11ಕೆವಿ ಚಂದ್ರುಗುತ್ತಿ | ಚಂದ್ರುಗುತ್ತಿ | 20 | ಕತವಾಯಿ, ತೋರಗೊಂಡನಕೊಪ್ಪ, ಹೊಳೆಮರೂರು, ಅಂದವಳ್ಳಿ, ಬಾಡದಬೈಲು, ಹೊಸಕೊಪ್ಪ, ಹಳೆಮರೂರು, ಚಂದ್ರುಗುತ್ತಿ, ನವನಗರ, ಗುಂಜನೂರು, ಅಂಕರವಳ್ಳಿ, ಬಸ್ತಿಕೊಪ್ಪ, ಕೆರೆಹೊಂಡ, ಹುಲ್ತಿಕೊಪ್ಪ, ಹೆಚ್ಚೆ, ತಟ್ಟಿಕೆರೆ, ಬಂದಿಗೆ, ವಕ್ಕಲಕೊಪ್ಪ, ಚಿಕ್ಕಮಾಕೊಪ್ಪ, ಹೊಳೆಜೋಳದಗುಡ್ಡೆ |
| ಒಟ್ಟು | | | 126 | |

## ಆನವಟ್ಟಿ ಉಪವಿಭಾಗ

| ಕ್ರ.ಸಂ | ವಿದ್ಯುತ್ ವಿತರಣಾ ಉಪಕೇಂದ್ರ | 11 ಕೆ.ವಿ ಮಾರ್ಗದ ಹೆಸರು | ಗ್ರಾಮಗಳ ಸಂಖ್ಯೆ | ಗ್ರಾಮಗಳ ಹೆಸರು |
|---|---|---|---|---|
| 1 | 110/11 ಕೆ.ವಿ ಕೋಟಿಪುರ | ಎಫ್-13 – ಗುಡುಗಿನಕೊಪ್ಪ | 5 | ಗುಡುಗಿನಕೊಪ್ಪ, ಚಿಕ್ಕಬ್ಯೂರು, ಚಾಟಿಕೊಪ್ಪ, ಕಾನುಕೊಪ್ಪ-ಹೊಸೂರು. |
| 2 | 110/11 ಕೆ.ವಿ ಕೋಟಿಪುರ | ಎಫ್-19 – ಎನ್.ಜೆ.ವೈ – ಕೋಟಿಪುರ (ಅಗಸನಹಳ್ಳಿ) | 9 | ಕೋಟಿಪುರ, ನೇರಲಿಗೆ, ಮಲ್ಲಾಪುರ, ಅಗಸನಹಳ್ಳಿ, ದ್ವಾರಹಳ್ಳಿ, ತೊರವಂದ, ಮೂಡಿ, ದೊಡ್ಡಿಕೊಪ್ಪ, ನೆಲ್ಲಿಕೊಪ್ಪ, |
| 3 | 110/11 ಕೆ.ವಿ ಕೋಟಿಪುರ | ಎಫ್-10 - ಹಂಚಿ (ನೆಗವಾಡಿ) | 12 | ಗಿಣಿವಾಲ ಹಂಚಿ, ಹಿರೇಮಾಗಡಿ, ಗಂಗವಳ್ಳಿ, ಚಿಕ್ಕಿಡಗೋಡು, ಹಿರೇಇಡಗೋಡು, ವೃತ್ತಿಕೊಪ್ಪ, ತೆವರತೆಪ್ಪ, ನೆಗವಾಡಿ, ಎಸ್.ಎನ್. ಕೊಪ್ಪ, ತತ್ತೂರು, ಕುಂಬಾರಕೊಪ್ಪ, ಹಿರೇಕಬ್ಬೂರು. |
| 4 | 110/11 ಕೆ.ವಿ ಭಾರಂಗಿ | ಎಫ್-11 – ಕಮನವಳ್ಳಿ | 12 | ಭಾರಂಗಿ, ಗುಡ್ಡದಬೆಣ್ಣೆಗೆರೆ, ಹಳ್ಳದಬೆಣ್ಣೆಗೆರೆ, ಯಲಿವಾಳ, ಜೋಗಿಹಳ್ಳಿ, ಹಿರೇಚೌಟಿ, ಚಿಕ್ಕಚೌಟಿ, ಬೆಲವಂತನಕೊಪ್ಪ, ಕುಣೆತೆಪ್ಪ, ಎಣ್ಣೆಕೊಪ್ಪ, ಹುಣಸವಳ್ಳಿ, ತಲ್ಲೂರು. |
| ಒಟ್ಟು | | | 38 | |